# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 201
ಸದಸ್ಯರ ಹೆಸರು : ಶ್ರೀ ಮಹಾಂತೇಶ ಮ. ಕವಟಗಿಮಠ
ಉತ್ತರಿಸಬೇಕಾದ ಸಚಿವರು : ಸಾರಿಗೆ ಸಚಿವರು
ಉತ್ತರಿಸಬೇಕಾದ ದಿನಾಂಕ : 18-07-2019

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿ ಎರಡನೇ ಶನಿವಾರ ಹಾಗೂ ರವಿವಾರ, ಸರ್ಕಾರಿ ರಜಾ ಸಮಯದಲ್ಲಿ ಸರ್ಕಾರಿ ನೌಕರರು ಮತ್ತು ಸಾರ್ವಜನಿಕರು ತಮ್ಮ ತಮ್ಮ ಊರುಗಳಿಗೆ ಪ್ರಯಾಣ ಮಾಡುತ್ತಿದ್ದು, ಈ ಸಂದರ್ಭದಲ್ಲಿ ಖಾಸಗಿ ಸಾರಿಗೆ ಸಂಸ್ಥೆಯವರು ಸಾಮಾನ್ಯ ದರಕ್ಕಿಂತಲೂ ದುಪ್ಪಟ್ಟು ಚಾರ್ಜ್ ಮಾಡುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಹೌದು ಸರ್ಕಾರದ ಗಮನಕ್ಕೆ ಬಂದಿರುತ್ತದೆ. |
| ಆ | ಖಾಸಗಿಯವರಲ್ಲದೇ ಸರ್ಕಾರಿ ಸ್ವಾಮ್ಯದ ಕೆ.ಎಸ್.ಆರ್.ಟಿ.ಸಿಯಲ್ಲಿಯೂ ಕೂಡ ಟಿಕೆಟ್‌ನ ಬೆಲೆ ಏರಿಸುತ್ತಿರುವುದು ಸಾರ್ವಜನಿಕರಲ್ಲಿ ಆತಂಕ ಉಂಟುಮಾಡಿರುವುದರ ಬಗ್ಗೆ ಸರ್ಕಾರದ ನಿಲುವೇನು: | ರಾಜ್ಯ ಸಾರಿಗೆ ಸಂಸ್ಥೆಗಳು ಮಧ್ಯಮ ಮತ್ತು ಕೆಳವರ್ಗದ ಪ್ರಯಾಣಿಕರು ಹೆಚ್ಚಿನ ಸಂಖ್ಯೆಯಲ್ಲಿ ಪ್ರಯಾಣಿಸುವ ವೇಗದೂತ ಮತ್ತು ಸಾಮಾನ್ಯ ದರ್ಜೆಯ ಸಾರಿಗೆಗಳಲ್ಲಿ ಹಬ್ಬ ಹರಿದಿನಗಳಲ್ಲಿ ಮತ್ತು ಸರ್ಕಾರಿ ರಜೆ ದಿನಗಳಲ್ಲಿ ಹೆಚ್ಚಿನ ಪ್ರಯಾಣ ದರ ವಿಧಿಸುತ್ತಿರುವುದಿಲ್ಲ.<br><br>ಆದರೆ, ಪ್ರತಿಷ್ಠಿತ ಸಾರಿಗೆಗಳಲ್ಲಿ ಮಾತ್ರ ವಾರಾಂತ್ಯ ದಿನಗಳಂದು ಶೇ.10 ರಷ್ಟು ಮತ್ತು ಹಬ್ಬ, ಜಾತ್ರೆ ದಿನಗಳಲ್ಲಿ ಕಾರ್ಯಾಚರಣೆ ಮಾಡುವ ವಿಶೇಷ/ಹೆಚ್ಚುವರಿ ಸಾರಿಗೆಗಳಲ್ಲಿ ಮಾತ್ರ ಶೇ.20 ರಷ್ಟು ಹೆಚ್ಚುವರಿ ಪ್ರಯಾಣ ದರವನ್ನು ವಿಧಿಸಲಾಗುತ್ತಿದೆ.<br><br>ಈ ರೀತಿ ಕಾರ್ಯಾಚರಿಸುವ ವಿಶೇಷ/ಹೆಚ್ಚುವರಿ ಸಾರಿಗೆಗಳಲ್ಲಿ ಏಕಮುಖ (One way) ಸಂಚಾರ ಒತ್ತಡವಿರುವುದರಿಂದ, ವಿರುದ್ಧ ದಿಕ್ಕಿನಿಂದ ವಾಹನಗಳನ್ನು ವಿರಳ ಪ್ರಯಾಣಿಕರಿಂದಾಗಿ ಖಾಲಿಯಾಗಿ ಆಚರಣೆ ಮಾಡಬೇಕಾಗುತ್ತದೆ, ಇದರಿಂದಾಗಿ ನಿಗಮಕ್ಕೆ ನಷ್ಟವಾಗುತ್ತದೆ. ಆದುದರಿಂದ ಸಾರ್ವಜನಿಕ ಪ್ರಯಾಣಿಕರ ಹಿತಾಸಕ್ತಿಯನ್ನು ಗಮನದಲ್ಲಿರಿಸಿಕೊಂಡು ಅವರಿಗೆ ಹೆಚ್ಚಿನ ಹೊರೆಯಾಗದಂತೆ ವಿಶೇಷ/ಹೆಚ್ಚುವರಿ ಸಾರಿಗೆಗಳಲ್ಲಿ ಮಾತ್ರ ಶೇ.20 ರಷ್ಟು ಹೆಚ್ಚುವರಿ ಪ್ರಯಾಣದರವನ್ನು ವಿಧಿಸಲಾಗುತ್ತಿದೆ. |

| | | |
|---|---|---|
| ಇ | ಈ ರೀತಿ ಹಬ್ಬ-ಹರಿದಿನಗಳಲ್ಲಿ ಪ್ರಯಾಣಿಕರಿಗೆ ಆಗುತ್ತಿರುವ ಸುಲಿಗೆ ನಿಲ್ಲಿಸಲು ಸರ್ಕಾರ ಮುಂಬರುವ ದಿನಗಳಲ್ಲಿ ಏನು ಕ್ರಮ ಕೈಗೊಳ್ಳಲಿದೆ? (ವಿವರ ನೀಡುವುದು) | ಜನಸಂದಣಿ ಹೆಚ್ಚಾಗುವ ಯಾವುದೇ ದಿನ/ದಿನಗಳಲ್ಲಿ ಅಥವಾ ಹಬ್ಬ, ಜಾತ್ರೆ, ವಾರಾಂತ್ಯ ದಿನಗಳಲ್ಲಿ ಪ್ರಸ್ತುತ ವಿಧಿಸುತ್ತಿರುವ ದರಕ್ಕಿಂತ ಎರಡು ಪಟ್ಟು ಹೆಚ್ಚಾಗದಂತೆ ಪ್ರಯಾಣ ದರ ವಿಧಿಸಲು ಅವಕಾಶವಿರುತ್ತದೆ.<br><br>ಸಾರ್ವಜನಿಕ ಪ್ರಯಾಣಿಕರ ಹಿತಾಸಕ್ತಿಯನ್ನು ಗಮನದಲ್ಲಿರಿಸಿಕೊಂಡು ಅವರಿಗೆ ಹೆಚ್ಚಿನ ಹೊರೆಯಾಗದಂತೆ ಹಬ್ಬ ಹರಿದಿನ ಮತ್ತು ರಜೆ ದಿನಗಳಲ್ಲಿ ಸಂಸ್ಥೆಯಿಂದ ಕಾರ್ಯಾಚರಣೆ ಮಾಡುವ ವಿಶೇಷ/ಹೆಚ್ಚುವರಿ ಸಾರಿಗೆಗಳಲ್ಲಿ ಮಾತ್ರ ಹೆಚ್ಚುವರಿ ಪ್ರಯಾಣ ದರವನ್ನು ವಿಧಿಸಲಾಗುತ್ತಿದೆ.<br><br>ಸರ್ಕಾರವು ನಿಗದಿಪಡಿಸಿದ ದರಕ್ಕಿಂತ ಹೆಚ್ಚಿನ ದರವನ್ನು ಪ್ರಯಾಣಿಕರಿಂದ ವಸೂಲು ಮಾಡಬಾರದೆಂದು ಖಾಸಗಿ ಪ್ರವರ್ತಕರಿಗೆ ಮತ್ತು ಸಾರಿಗೆ ಸಂಸ್ಥೆಗಳಿಗೆ ಕಟ್ಟುನಿಟ್ಟಿನ ಸೂಚನೆ ನೀಡಲಾಗಿದೆ. ಒಂದು ವೇಳೆ ವಸೂಲು ಮಾಡುತ್ತಿರುವುದು ಕಂಡು ಬಂದಲ್ಲಿ, ರಹದಾರಿಗಳ ಮೇಲೆ ಕಾನೂನು ರೀತ್ಯ ಕ್ರಮ ಕೈಗೊಳ್ಳಲಾಗುತ್ತಿದೆ. |

ಸಂಖ್ಯೆ: ಟಿಡಿ 38 ಟಿಸಿಕ್ಯೂ 2019

(ಡಿ.ಸಿ.ತಮ್ಮಣ್ಣ)
ಸಾರಿಗೆ ಸಚಿವರು